# ಗಿಳಿಯ ಪಾಠ
# ರಬೀಂದ್ರನಾಥ ಠಾಕೂರ್

ಒಂದಾನೊಂದು ಕಾಲದಲ್ಲಿ ಒಂದು ಪಕ್ಷಿ ಇತ್ತು. ಅದೊಂದು ಪೆದ್ದು ಪಕ್ಷಿಯಾಗಿತ್ತು. ಸದಾ ಕಾಲ ಬರಿ ಹಾಡುತ್ತಲೇ ಇರುತ್ತಿತ್ತೇ ಹೊರತು ಗ್ರಂಥಗಳಿಂದ ಉರುಹೊಡೆದ ಸಾಲುಗಳನ್ನು ಪಲುಕುತ್ತಿರಲಿಲ್ಲ. ತನಗೆ ಬೇಕಾದಂತೆ ಅತ್ತಿತ್ತ ಹಾರುತ್ತಿರುತ್ತಿತ್ತು, ಸನ್ನಡತೆಯ ಕೊರತೆ ಅದರಲ್ಲಿ ಎದ್ದು ತೋರುತ್ತಿತ್ತು.

"ಜೀವನದಲ್ಲಿ ಅಜ್ಞಾನದಿಂದಾಗಿ ಬಹಳ ಬೆಲೆ ತೆರಬೇಕಾಗುತ್ತದೆ. ಪ್ರತಿಯಾಗಿ ಏನೂ ಕೊಡದಿದ್ದರೂ ಮೂರ್ಖರು ಉತ್ತಮರಷ್ಟೇ ಆಹಾರ ಸೇವಿಸುತ್ತಾರೆ" ರಾಜ ತನ್ನಷ್ಟಕ್ಕೇ ಹೇಳಿಕೊಂಡನು.

ಅವನು ತನ್ನ ಸೋದರ ಬಂಧುಗಳನ್ನು ತನ್ನ ಬಳಿಗೆ ಕರೆಯಿಸಿಕೊಂಡು ಆ ಪಕ್ಷಿಗೆ ತೀವ್ರವಾದ ಶಾಲಾ ಶಿಕ್ಷಣ ಕೊಡಬೇಕೆಂದು ತಿಳಿಸಿದನು.

ಅವರು ಪಂಡಿತರುಗಳನ್ನು ಕರೆಯಿಸಿ ಕೂಡಲೇ ಆ ವಿಷಯದ ಮೂಲವನ್ನರಸತೊಡಗಿದರು. ಅವರು ಪಕ್ಷಿಗಳ ಅಜ್ಞಾನವು ಅವುಗಳು ವಾಸಿಸುವ ಕೆಳದರ್ಜೆಯ ಗೂಡುಗಳ ಕಾರಣದಿಂದ ಎಂಬ ತೀರ್ಮಾನಕ್ಕೆ ಬಂದರು. ಆದುದರಿಂದ, ಪಂಡಿತರ ಪ್ರಕಾರ, ಈ ಪಕ್ಷಿಯ ಕಲಿಕೆಯ ಮೊಟ್ಟ ಮೊದಲ ಅಗತ್ಯವೆಂದರೆ ತಕ್ಕದೊಂದು ಪಂಜರವೇ ಆಗಿತ್ತು.

ಪಂಡಿತರು ತಕ್ಕ ಬಹುಮಾನಗಳನ್ನು ಪಡೆದು ತಂತಮ್ಮ ಮನೆಗಳಿಗೆ ತೆರಳಿದರು.

ಭಾರೀ ಅಲಂಕಾರಗಳನ್ನೊಳಗೊಂಡ ಒಂದು ಚಿನ್ನದ ಪಂಜರ ಸಿದ್ಧವಾಯಿತು. ಪ್ರಪಂಚದ ಎಲ್ಲೆಡೆಯಿಂದ ಅದನ್ನು ನೋಡಲು ಜಂಗುಳಿ ನೆರೆಯಿತು. "ಸಂಸ್ಕೃತಿ ಪಂಜರದಲ್ಲಿ ಬಂಧಿತವಾಗಿದೆ" ಎಂದು ಕೆಲವರು ಉದ್ವೇಗದಿಂದ ಕಣ್ಣೀರಿಟ್ಟರು. ಉಳಿದವರು "ಸಂಸ್ಕೃತಿ ಇರದಿದ್ದರೇನಾಯಿತು, ಪಂಜರ ಕೊನೆಯವರೆಗೂ ಉಳಿಯುವುದು ಮುಖ್ಯವಾದ ವಿಚಾರ. ಏನು ಅದೃಷ್ಟ ಈ ಪಕ್ಷಿಯದು" ಎಂದು ಪ್ರತಿಕ್ರಿಯಿಸಿದರು.

ಅಕ್ಕಸಾಲಿಗ ಹಣ ತುಂಬಿ ಝಣ ಝಣ ಎನ್ನುವ ಚೀಲದೊಡನೆ ತಡಮಾಡದೆ ಮನೆಯೆಡೆಗೆ ಧಾವಿಸಿದನು.

ಪಂಡಿತನು ಪಕ್ಷಿಯ ಶಿಕ್ಷಣಕ್ಕೆ ಪಟ್ಟಾಗಿ ಕುಳಿತನು. ಗಂಭೀರ ಚಿಂತನೆಯೊಡನೆ ಚಿಟಿಕೆ ನಸ್ಯ ತೆಗೆಯುತ್ತಾ “ನಮ್ಮ ಕಾರ್ಯಕ್ಕೆ ಪಠ್ಯ ಪುಸ್ತಕಗಳು ಹೆಚ್ಚಾಗುವುವೆಂಬ ಮಾತೇ ಇಲ್ಲ” ಎಂದನು.

ರಾಜನ ಬಂಧುಗಳು ಸಾಕುಸಾಕೆನಿಸುವಷ್ಟು ಸಾಹಿತ್ಯಗಳನ್ನು ಹೊತ್ತು ತಂದರು. ಪುಸ್ತಕಗಳಿಂದ ಪ್ರತಿ ಮಾಡಿದರು, ಪ್ರತಿಗಳಿಂದ ನಕಲು ತೆಗೆದರು. ಹಸ್ತಪ್ರತಿಗಳ ನಿಲುಕಲಾರದಷ್ಟು ಎತ್ತರದ ರಾಶಿ ಪೇರಿಸುವವರೆಗೂ ಈ ಕಾರ್ಯ ಮುಂದುವರೆಯಿತು. “ಆಹಾ ಅಗಾಧ ಎತ್ತರದ, ಮುಗಿಲುಮುಟ್ಟುವ, ಸಂಸ್ಕೃತಿಯ ಗೋಪುರ” ಜನ ಅಚ್ಚರಿಯಿಂದ ಮಾತನಾಡಿಕೊಂಡರು.

ಲಿಪಿಕಾರರು ಹಗುರಾದ ಹೃದಯದಿಂದ, ತುಂಬಿಕೊಂಡ ಹಣದ ಚೀಲಗಳಿಂದ ದಡಬಡಿಸಿ ಮನೆಗಳತ್ತ ನಡೆದರು.

ರಾಜಬಂಧುಗಳು ಪಂಜರವನ್ನು ಸುಸ್ಥಿತಿಯಲ್ಲಿರುಸುವತ್ತ ತಮ್ಮನ್ನು ಭಯಂಕರವಾಗಿ ತೊಡಗಿಸಿಕೊಂಡಿದ್ದರು. ಅದನ್ನು ತಿಕ್ಕಿ ತೀಡಿ ಹೊಳಪು ತರಿಸುವುದು ನಡೆದೇ ಇತ್ತು. ಜನರು ಕಡೆಗೊಮ್ಮೆ ತೃಪ್ತಿಯಿಂದ “ಮುನ್ನಡೆಯೆಂದರೆ ಇದೇನೇ!” ಎಂದು ನುಡಿದರು.

ಬಹುಸಂಖ್ಯೆಯಲ್ಲಿ ಜನರು ಈ ಕೆಲಸಕ್ಕಾಗಿ ದುಡಿಯುತ್ತಿದ್ದರು, ಇನ್ನೂ ಹೆಚ್ಚು ಜನರು ಅದರ ಮೇಲ್ವಿಚಾರಣೆ ನಡೆಸುತ್ತಿದ್ದರು. ಆಮೇಲೆ ಇವರೆಲ್ಲರೂ ತಮ್ಮ ಅತಿ, ಅನತಿ ದೂರದ ಎಲ್ಲಾ ಸೋದರ ಬಂಧುಗಳೊಂದಿಗೆ ತಮ್ಮೆಲ್ಲರಿಗಾಗಿ ಅರಮನೆಯೊಂದನ್ನು ನಿರ್ಮಿಸಿಕೊಂಡು ಸುಖವಾಗಿದ್ದರು.

ಈ ಪ್ರಪಂಚದಲ್ಲಿ ಬೇರೆ ಇನ್ನೇನು ಕಡಿಮೆಯಿದ್ದರೂ ತಪ್ಪು ಹುಡುಕುವವರಿಗೆ ಯಾವಾಗಲೂ ಯಾವ ಕೊರತೆಯೂ ಇಲ್ಲ. ಅಂತಹ ಜನರು, ಪ್ರತಿಯೊಬ್ಬರ ಗಮನವೂ ವಿಪರೀತವಾಗಿ ಅಲಂಕೃತವಾದ ಪಂಜರದೆಡೆಗೇ ಇದೆಯೇ ಹೊರತು ಪಕ್ಷಿಯ ಕಡೆಗಲ್ಲ, ಎನ್ನತೊಡಗಿದರು.

ಈ ಮಾತು ರಾಜನ ಕಿವಿಗೆ ತಲುಪಿದಾಗ ಅವನು ತನ್ನ ಸೋದರ ಬಂಧುಗಳನ್ನು ಕರೆದು "ಏನಪ್ಪ, ನಾವಿದೇನನ್ನು ಕೇಳುತ್ತಿದ್ದೇವೆ?" ಎಂದು ವಿಚಾರಿಸಿದನು.

ಅವರಿಂದ "ಸತ್ಯವನ್ನು ತಿಳಿಯಬೇಕೆಂದಾದರೆ ಅಕ್ಕಸಾಲಿಯ, ಪಂಡಿತರ, ಲಿಪಿಕಾರರ, ಮೇಲ್ವಿಚಾರಕರ ಸಾಕ್ಷಿಗಳನ್ನು ಪಡೆದುಕೊಳ್ಳಿ. ದೋಷಾರೋಪಣೆ ಮಾಡುವವರಿಗೆ ಆಹಾರದ ಕೊರತೆಯಿರಬೇಕು, ಅದಕ್ಕೇ ಅವರ ನಾಲಿಗೆ ಕೆರೆಯುತ್ತಿರಬೇಕು" ಎಂಬ ಉತ್ತರ ಬಂದಿತು.

ಆ ವಿವರಣೆಯಿಂದ ಸಂತುಷ್ಟನಾದ ರಾಜನು ಹಿಗ್ಗಿನಿಂದ ತನ್ನ ಆ ಬಂಧುಗಳನ್ನು ತನ್ನ ಅಪರೂಪದ ಆಭರಣಗಳಿಂದ ಸನ್ಮಾನಿಸಿದನು.

ಬಹುಕಾಲದ ನಿರೀಕ್ಷೆಯ ನಂತರ, ಪಕ್ಷಿಯ ಶಿಕ್ಷಣ ಕಾರ್ಯದಲ್ಲಿ ಬಿಡುವಿರದೆ ತೊಡಗಿಕೊಂಡ ತನ್ನ ವಿದ್ಯಾ ಇಲಾಖೆಯ ಬಗೆಯನ್ನು ತಾನೇ ಕಣ್ಣಾರೆ ಕಾಣುವ ಆಸೆಯನ್ನು ತಡೆಯದಾದ ರಾಜನು ಒಂದು ದಿನ ಕಲಿಕೆಯ ಸ್ಥಳಕ್ಕೆ ಬಂದನು.

ಮುಂಬಾಗಿಲಿನಿಂದ ಶಂಖ, ಕೊಂಬು, ಕಹಳೆ, ನಗಾರಿ, ಮದ್ದಳೆ, ಬುರುಡೆಮದ್ದಳೆ, ಡೋಲು, ತಾಳ, ತಂಬೂರಿ, ಝಲ್ಲರಿ, ಕೊಳಲು, ಕೊಳವೆ ವಾದ್ಯಗಳು, ತೊಗಲು ವಾದ್ಯಗಳು, – ಈ ಎಲ್ಲವುಗಳ ಶಬ್ದವೂ ಹೊರಟಿತು. ಪಂಡಿತರುಗಳು ಉಚ್ಚಸ್ವರದಲ್ಲಿ ಮಂತ್ರ ಪಠಣವನ್ನು ಆರಂಭಿಸಿದರು. ಅಕ್ಕಸಾಲಿಗಳು, ಲಿಪಿಕಾರರು, ಮೇಲ್ವಿಚಾರಕರು, ತಮ್ಮ ಎಲ್ಲಾ ಅಂತರದ ಬಂಧುಗಳೊಂದಿಗೆ ಗಟ್ಟಿಯಾಗಿ ಜಯಜಯಕಾರ ಮಾಡಿದರು.

ರಾಜಬಂಧುಗಳು ನಸುನಗುತ್ತಾ "ಮಹಾಸ್ವಾಮಿ ಇವೆಲ್ಲಾ ನಿಮಗೆ ಹೇಗೆನ್ನಿಸಿತು?" ಎಂದು ಕೇಳಿದರು.

ರಾಜನು "ದಿಗಿಲುಗೊಳಿಸುವಂತಹ ವಿದ್ಯೆಯ ಮಹಾನ್ ತತ್ತ್ವ ದಿಗ್ಭ್ರಾಂತಿಗೊಳಿಸಿತು" ಎಂದು ಉತ್ತರಿಸಿದನು.

ಭಾರೀ ಸಂತೃಪ್ತನಾಗಿ ರಾಜನು ಇನ್ನೇನು ಆನೆಯನ್ನೇರಬೇಕೆನ್ನುವಷ್ಟರಲ್ಲಿ ಪೊದೆಯ ಹಿಂದಿನಿಂದ ಕುಹಕಿಯ ಸ್ವರ ಕಿರಿಚಿತು – "ಮಹಾರಾಜಾ, ಪಕ್ಷಿಯನ್ನು ನೋಡಿದ್ದಾಯಿತೇ?"

ರಾಜನು “ಓಹ್! ನೋಡಲೇ ಇಲ್ಲವಲ್ಲ! ಪಕ್ಷಿಯನ್ನು ಸಂಪೂರ್ಣವಾಗಿ ಮರೆತೇಬಿಟ್ಟೆನಲ್ಲ!” ಎಂದು ಉದ್ಗರಿಸಿದನು.

ಹಿಂದಿರುಗಿ ಬಂದು ರಾಜನು ಪಂಡಿತರನ್ನು ಪಕ್ಷಿಗೆ ಕಲಿಸಲು ಅವರು ಅಳವಡಿಸಿಕೊಂಡಿರುವ ವಿಧಾನದ ಬಗ್ಗೆ ವಿಚಾರಿಸಿದನು. ಅವರು ಅದನ್ನು ಅವನಿಗೆ ತೋರಿಸಿದರು. ಅವನು ಅದರಿಂದ ಭಾರೀ ಪ್ರಭಾವಿತನಾದನು. ಅದು ಎಷ್ಟು ಅದ್ಭುತವಾಗಿದ್ದಿತೆಂದರೆ ಅದರೆದುರಿನಲ್ಲಿ ಪಕ್ಷಿ ತೀರಾ ಕ್ಷುಲ್ಲಕವಾಗಿ ತೋರಿತು. ವ್ಯವಸ್ಥೆಯಲ್ಲಿ ಯಾವುದೇ ಕೊರತೆಯಿಲ್ಲವೆಂದು ಅರಸನಿಗೆ ತೃಪ್ತಿಯಾಯಿತು. ಪಕ್ಷಿಯಿಂದಲೇ ದೂರನ್ನು ನಿರೀಕ್ಷಿಸುವುದಾದರೆ ಅದು ಅಸಂಭಾವ್ಯವಾಗಿತ್ತು. ಸಿಳ್ಳು ಹಾಕುವುದಿರಲಿ, ಪಿಸುಗುಟ್ಟಲೂ ಸಾಧ್ಯವಾಗದಂತೆ ಅದರ ಗಂಟಲು ತುರುಕಲಾಗಿದ್ದ ಪುಸ್ತಕದ ಹಾಳೆಗಳಿಂದ ತುಂಬಿ ಹೋಗಿತ್ತು. ನೋಡುವವರಿಗೆ ಶಿಕ್ಷಾ ಪದ್ಧತಿಯು ರೋಮಾಂಚನವನ್ನುಂಟು ಮಾಡುವಂತಿತ್ತು.

ಈ ಬಾರಿ ಆನೆಯನ್ನೇರುವಾಗ ರಾಜನು ರಾಜ್ಯದ ಕಿವಿ–ಎಳೆಯುವವನಿಗೆ ಕುಹಕಿಯ ಎರಡೂ ಕಿವಿಗಳನ್ನೂ ಚೆನ್ನಾಗಿ ಎಳೆಯುವಂತೆ ಆಜ್ಞೆ ಮಾಡಿದನು.

ಹೀಗೆ ಆ ಪಕ್ಷಿ ಮೂರ್ಖತೆಯ ಗಡಿಯನ್ನು ದಾಟಲು ಕ್ರಮದಿಂದ ತೆವಳುತ್ತಾ ಸಾಗಿತು. ಅದರ ಪ್ರಗತಿಯು ಉತ್ತಮವಾಗಿತ್ತೆಂದೇ ಹೇಳಬಹುದು. ಆದರೆ ಆಗಾಗ ಪ್ರಕೃತಿ, ಶಿಕ್ಷಣವನ್ನು ಮೀರಿ, ತನ್ನ ಮೇಲುಗೈಯನ್ನು ತೋರಿಸಿಬಿಡುತ್ತಿತ್ತು. ಮುಂಜಾವದ ಬೆಳಕಿನ ಕಿರಣಗಳು ಪಂಜರದೊಳಗೆ ಇಣುಕಿದಾಗ ಕೆಲವೊಮ್ಮೆ ಅದು ತನ್ನ ಮೌಢ್ಯವನ್ನು ತೋರಿಸುವಂತೆ ರೆಕ್ಕೆಗಳನ್ನು ಬಡಿಯುತ್ತಿತ್ತು. ನಂಬಲಸಾಧ್ಯವಾದರೂ ಅದು ತನ್ನ ದುರ್ಬಲವಾದ ಕೊಕ್ಕುಗಳಿಂದ ಪಂಜರದ ಸಲಾಕೆಗಳನ್ನು ದಯನೀಯವಾಗಿ ಕುಕ್ಕುತ್ತಿತ್ತು.

“ಇದೆಂತಹ ಅವಿಧೇಯತೆ” ಎಂದು ಗುಡುಗಿದನು ಕೊತ್ವಾಲನು.

ಕಮ್ಮಾರನು ತನ್ನ ಕುಲುಮೆ ಮತ್ತು ಸುತ್ತಿಗೆಗಳೊಂದಿಗೆ ರಾಜನ ವಿದ್ಯಾ ಇಲಾಖೆಯಲ್ಲಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನು. ಅಬ್ಬಾ, ಎಂತಹ ಪ್ರಚಂಡ ಹೊಡೆತಗಳು! ಶೀಘ್ರದಲ್ಲಿಯೇ ಕಬ್ಬಿಣದ ಸಂಕೋಲೆಗಳು ಸಿದ್ಧವಾದವು. ಪಕ್ಷಿಯ ರೆಕ್ಕೆಗಳನ್ನು ಬಂಧಿಸಲಾಯಿತು.

ರಾಜನ ಭಾವ ಮೈದುನಂದಿರ ಮುಖಗಳು ಕಪ್ಪಿಟ್ಟವು. ಅವರು ತಲೆಯನ್ನಲುಗಾಡಿಸುತ್ತಾ "ಈ ಪಕ್ಷಿಗಳಿಗೆ ಬುದ್ಧಿಯಿಲ್ಲದಿರುವುದಷ್ಟೇ ಅಲ್ಲ, ಕೃತಜ್ಞತೆಯೂ ಇಲ್ಲ," ಹೇಳಿದರು.

ಪಂಡಿತರು ಒಂದು ಕೈಯಲ್ಲಿ ಪುಸ್ತಕವನ್ನು ಇನ್ನೊಂದರಲ್ಲಿ ಬೆತ್ತವನ್ನೂ ಹಿಡಿದುಕೊಂಡು, ಶಿಕ್ಷಣವೆಂದು ಕರೆಸಿಕೊಳ್ಳತಕ್ಕದ್ದನ್ನು ಆ ಬಡಪಾಯಿ ಪಕ್ಷಿಗೆ ಕೊಟ್ಟರು.

ಜಾಗರೂಕತೆಗಾಗಿ ಕೊತ್ವಾಲನನ್ನು ಮತ್ತು ಸರಪಳಿಯನ್ನು ಬೆಸೆದ ಚಾಕಚಕ್ಯತೆಗೆ ಕಮ್ಮಾರನನ್ನು ಬಿರುದುಗಳಿಂದ ಸನ್ಮಾನಿಸಲಾಯಿತು.

ಪಕ್ಷಿ ಸತ್ತು ಹೋಯಿತು.

ಇದು ಘಟಿಸಿ ಎಷ್ಟು ಸಮಯವಾಯಿತೆಂದು ಯಾರಿಗೂ ಸುಳಿವೇ ಇರಲಿಲ್ಲ. ಕುಹಕಿಯೇ ಇದನ್ನು ಕುರಿತು ಮೊದಲು ಸುದ್ದಿ ಹರಡಿದವನಾಗಿದ್ದನು.

ರಾಜನು ತನ್ನ ಬಂಧುಗಳನ್ನು ಕರೆದು, "ನನ್ನ ಪ್ರಿಯ ಬಂಧುಗಳೇ, ನಾವಿದೇನನ್ನು ಕೇಳುತ್ತಿದ್ದೇವೆ?" ಎಂದು ವಿಚಾರಿಸಿದನು.

ರಾಜ ಬಂಧುಗಳು "ಸ್ವಾಮೀ, ಪಕ್ಷಿಯ ವಿದ್ಯಾಭ್ಯಾಸ ಸಂಪೂರ್ಣವಾಗಿದೆ" ಎಂದರು.

ರಾಜನು "ಅದು ಕುಪ್ಪಳಿಸುವುದೇ?" ಎಂದು ಕೇಳಿದನು.

"ಇನ್ನು ಎಂದಿಗೂ ಇಲ್ಲ" ಎಂದರು ರಾಜಬಂಧುಗಳು.

"ಅದು ಹಾರುವುದೇ?"

"ಊಂಹೂಂ"

ರಾಜನು "ಪಕ್ಷಿಯನ್ನು ನನ್ನಲ್ಲಿಗೆ ಕರೆತನ್ನಿ" ಎಂದನು.

ಕೊತ್ವಾಲರ, ಸೈನಿಕರ, ಸವಾರರ ರಕ್ಷಣೆಯಲ್ಲಿ ಆ ಪಕ್ಷಿಯನ್ನು ಅವನಲ್ಲಿಗೆ ಕರೆತರಲಾಯಿತು. ರಾಜನು ತನ್ನ ಬೆರಳಿನಿಂದ ಅದರ ಶರೀರವನ್ನು ಒತ್ತಿದನು. ಒಳಗೆ ತುಂಬಲಾಗಿದ್ದ ಪುಸ್ತಕದ ಹಾಳೆಗಳು ಗಲಗಲಿಸಿದವು.

ಕಿಟಕಿಯ ಹೊರಗೆ ಆಗತಾನೇ ಮೊಗ್ಗುಗಳನ್ನು ಧರಿಸಿದ ಅಶೋಕದ ಎಲೆಗಳ ನಡುವಿನಿಂದ ಬೀಸಿಬಂದ ವಸಂತದ ತಂಗಾಳಿ ಏಪ್ರಿಲ್ ತಿಂಗಳ ಆ ಬೆಳಗನ್ನು ವಿಚಾರಮಗ್ನವಾಗಿಸಿತು.

---

**ಅನುವಾದ: ಕೆ ಜಿ ರಾಜಲಕ್ಷ್ಮಿ**